CPMG / KA / BG-GPO/13 / 2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೩೦, ೨೦೦೪ (ಆಶ್ವಯುಜ ೮, ಶಕ ವರ್ಷ ೧೯೨೬) | ಸಂಚಿಕೆ ೪೦ |
| --- | --- | --- |



## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 42 ರಾಶಾಪ್ರ 2004, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2004**

ಕರ್ನಾಟಕ ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಪೂರಕ ಅಧಿನಿಯಮ, 1961ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಪೂರಕ ಅಧಿನಿಯಮ, 1961**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**

1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ
2. ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ತಿದ್ದುಪಡಿ ಅಧಿನಿಯಮ, 1960ನ್ನು ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವುದು
3. 1960ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 6 ರ ನಿರಸನ

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

**1961ರ ಅಧಿನಿಯಮ 3:-** ಭಾರತ ಸರ್ಕಾರವು 1951ನೇ ಇಸವಿಯಲ್ಲಿ ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಅಧಿನಿಯಮ ಎಂಬ ಒಂದು ಕಾನೂನನ್ನು ಜಾರಿಗೆ ತಂದಿತು. ಈ ಅಧಿನಿಯಮದ ಉಪಬಂಧಗಳು, ಭಾರತ ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯ 18 ಮತ್ತು 30ನೇ ನಮೂದುಗಳ ಉಪಬಂಧಗಳಿಗೆ ಅನ್ವಯಿಸುವಂತೆ ತೋರುವುದರಿಂದಾಗಿ ಭಾರತ ಸರ್ಕಾರದ ಸಲಹೆಯ ಮೇರೆಗೆ, ಕೇಂದ್ರ ಅಧಿನಿಯಮವು ಏಳನೇ ಅನುಸೂಚಿಯ ಪಟ್ಟಿ II ರಲ್ಲಿ ನಿರೂಪಿಸಲಾದ ಯಾವುದೇ ವಿಷಯಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಅದು ರಾಜ್ಯ ವಿಧಾನ ಮಂಡಲದಿಂದ ಅನುಮೋದಿತವಾದಂತೆ ಮಾನ್ಯವಾಗತಕ್ಕದ್ದು ಮತ್ತು ಬಂಧನಕಾರಿಯಾಗಿರತಕ್ಕದ್ದು ಎಂದು ಘೋಷಿಸುವ ಪೂರಕ ಕಾನೂನುಗಳನ್ನು ಭಾರತ ರಾಜ್ಯಗಳ ವಿಧಾನ ಮಂಡಲಗಳು ಜಾರಿಗೊಳಿಸಿದವು.

2. ನಿರ್ವಾಸಿತರ ಹಿತಾಸಕ್ತಿಯನ್ನು ಸಂಯುಕ್ತ ಸ್ವತ್ತುಗಳಿಂದ ಪ್ರತ್ಯೇಕಗೊಳಿಸುವುದಕ್ಕಾಗಿ ಅರ್ಜಿಗಳನ್ನು ದಾಖಲ್ಮಾಡುವುದಕ್ಕೆ ಸಂಬಂಧಿಸಿದಂತೆ ಒಂದು ಕಾಲಮಿತಿಯನ್ನು ನಿಗದಿಗೊಳಿಸುವ ಉದ್ದೇಶಕ್ಕಾಗಿ, ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಅಧಿನಿಯಮ, 1951ರ 6ನೇ ಪ್ರಕರಣವನ್ನು ತಿದ್ದುಪಡಿ ಮಾಡುವ ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ತಿದ್ದುಪಡಿ ಅಧಿನಿಯಮ, 1960ನ್ನು ಸಂಸತ್ತು ಜಾರಿ ಮಾಡಿತು.

3. ಕೆಲವು ಕ್ಲೇಮುಗಳು ರಾಜ್ಯ ಪಟ್ಟಿಯಲ್ಲಿನ (ಪಟ್ಟಿ II) ವಿಷಯಗಳಿಗೆ ಸಂಬಂಧಿಸಿರಬಹುದಾಗಿದ್ದರಿಂದ ಮತ್ತು ರಾಜ್ಯ ಪಟ್ಟಿಯಲ್ಲಿನ ವಿಷಯಗಳಿಗೆ ಅವು ಸಂಬಂಧಿಸಿರುವುದಷ್ಟರ ಮಟ್ಟಿಗೆ ರಾಜ್ಯದಲ್ಲಿ ತಿದ್ದುಪಡಿಗಳನ್ನು ಪರಿಣಾಮಕಾರಿಯಾಗಿ ಮಾಡುವ ಉದ್ದೇಶಕ್ಕಾಗಿ, ಪೂರಕ ಕಾನೂನನ್ನು ರಾಜ್ಯ ವಿಧಾನ ಮಂಡಲವು ಅಧಿನಿಯಮಿತ ಗೊಳಿಸಬಹುದೆಂದು ಭಾರತ ಸರ್ಕಾರವು ಸಲಹೆ ನೀಡಿತು. ವಿಧಾನ ಮಂಡಲವು ಅಧಿವೇಶನದಲ್ಲಿಲ್ಲದಿದ್ದುದರಿಂದಾಗಿ ಒಂದು ಅಧ್ಯಾದೇಶವನ್ನು ಪ್ರಖ್ಯಾಪಿಸಲಾಯಿತು. ಅಧ್ಯಾದೇಶದ ಬದಲಿಗೆ ಈ ಅಧಿನಿಯಮವನ್ನು ಮಂಡಿಸಲಾಗಿದೆ.

(ಎಲ್‌ಎಡಬ್ಲ್ಯೂ 11 ಎಲ್‌ಜಿಎನ್ 61 ರಿಂದ ಪಡೆಯಲಾಗಿದೆ).

**[1][ಕರ್ನಾಟಕ ಅಧಿನಿಯಮ][1] 1961ರ ಸಂಖ್ಯೆ 3**

(1961ನೇ ಏಪ್ರಿಲ್ ಆರನೆಯ ದಿನಾಂಕದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ)

**[1][ಕರ್ನಾಟಕ][1] ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಪೂರಕ ಅಧಿನಿಯಮ, 1961**

(1961ರ ಮಾರ್ಚ್ ಮೂವತ್ತೊಂದನೇ ದಿನಾಂಕದಂದು ರಾಜ್ಯಪಾಲರ ಅನುಮೋದನೆ ಪಡೆಯಲಾಗಿದೆ)

[1][ಕರ್ನಾಟಕ ರಾಜ್ಯ][1] ಕ್ಕೆ ಅನ್ವಯವಾಗುವಂತೆ ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಅಧಿನಿಯಮ, 1951ರ ಕೆಲವು ಉಪಬಂಧಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ಅಧಿನಿಯಮ.

[1][ಕರ್ನಾಟಕ ರಾಜ್ಯ][1] ಕ್ಕೆ ಅನ್ವಯವಾಗುವಂತೆ ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಅಧಿನಿಯಮ, 1951ರ (1951ರ ಕೇಂದ್ರಾಧಿನಿಯಮ LXIV) ಕೆಲವು ಉಪಬಂಧಗಳನ್ನು ಸೇರಿಸುವುದು ವಿಹಿತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದೆ ಹೇಳಿದಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಪೂರಕ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗುತ್ತದೆ.

(3) ಇದು 1960ನೇ ಅಕ್ಟೋಬರ್ 15ನೇ ದಿನದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ತಿದ್ದುಪಡಿ ಅಧಿನಿಯಮ, 1960ನ್ನು [1][ಕರ್ನಾಟಕ ರಾಜ್ಯ][1] ಕ್ಕೆ ಅನ್ವಯಿಸುವುದು.-** ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ತಿದ್ದುಪಡಿ ಅಧಿನಿಯಮ, 1960ರ (1960ರ ಕೇಂದ್ರಾಧಿನಿಯಮ 27) ಮೂಲಕ ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಅಧಿನಿಯಮ, 1951ಕ್ಕೆ (1951ರ ಕೇಂದ್ರಾಧಿನಿಯಮ LXIV) ಮಾಡಲಾದ ತಿದ್ದುಪಡಿಗಳು ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ II ರಲ್ಲಿ ನಿರೂಪಿಸಲಾದ ಯಾವುದೇ ವಿಷಯಕ್ಕೆ ಸಂಬಂಧಿಸಿರುವಷ್ಟರ ಮಟ್ಟಿಗೆ, ಅದರಲ್ಲಿ ಒಳಗೊಂಡಿರುವ ಉಪಬಂಧಗಳನ್ನು ರಾಜ್ಯ ವಿಧಾನ ಮಂಡಲದಿಂದ ಅಧಿನಿಯಮಿತಿಗೊಳಿಸಿದ್ದರೆ ಹೇಗೋ ಹಾಗೆ [1][ಕರ್ನಾಟಕ ರಾಜ್ಯ][1] ದಲ್ಲಿ ಸಿಂಧುವಾಗಿರತಕ್ಕದ್ದು.

**3. 1960ರ [1][ಕರ್ನಾಟಕ][1] ಅಧ್ಯಾದೇಶ ಸಂಖ್ಯೆ 6ರ ನಿರಸನ.-** [1][ಕರ್ನಾಟಕ][1] ನಿರ್ವಾಸಿತರ ಹಿತಾಸಕ್ತಿ (ಪ್ರತ್ಯೇಕೀಕರಣ) ಪೂರಕ ಅಧ್ಯಾದೇಶ, 1960ನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

The above translation of the Karnataka Evacuee Interest (Separation) Supplementary Act, 1961 (3 of 1961) shall be the authoritative text in the Kannada Language under section 5A of the Karnataka Official Language Act, 1963 (Karnataka Act No.26 of 1963).

GOVERNOR OF KARNATAKA

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ದಕ್ಷಿಣಾಮೂರ್ತಿ**

ಪಿ.ಆರ್. 567 ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**HOME AND TRANSPORT SECRETARIAT**

**NOTIFICATION No. HD 97 PCR 2004, Bangalore, dated: 2nd September 2004**

In pursuance of the Provisions of Section 6 of the Delhi Special Police Establishment Act, 1946 (Act XXV of 1946) the Government of Karnataka are pleased to accord consent to the extension of powers and jurisdiction of the members of the Delhi Special Police Establishment to investigate the case of cheating of a Japanese national, Mr. Hideki Ishino at Hampi (Hospet), Bellary District, Karnataka State on 3.2.2003 by a Interstate racket said to be the dealers in gems jeweler and any other offences

committed in the course of the transaction arising out of the same fact in regard to this case, within the whole State of Karnataka.

By Order and in the name of the Governor of Karnataka,

**P. KRISHNA MURTHY**

P.R. 548

Under Secretary to Government,
Home and Transport Department (Crimes).

**CORRIGENDUM No. HD 125 PCR 2004, Bangalore, dated: 2nd September 2004**

In Notification No. HD 125 PCR 2004, dated: 18.8.2004 for the words "r/w (II) (III) Naphtha Control order" appearing in the 9th line shall be read as "r/w 3(II) (III) Naphtha Control order". There are no other changes in the said Notification.

By Order and in the name of the Governor of Karnataka,

**P. KRISHNA MURTHY**

P.R. 549

Under Secretary to Government,
Home and Transport Department (Crimes).

**LAW SECRETARIAT**

**NOTIFICATION - I**

**No. LAW 13 LCE 2002, Bangalore, dated: 30th August 2004**

In exercise of the powers conferred by the proviso to sub-section (1) of Section 6 read with sub-section (1) of Section 10 and sub-section (1) of Section 13 of the Karnataka Civil Courts Act, 1964 (Karnataka Act 21 of 1964), the Government of Karnataka, in consultation with the High Court of Karnataka hereby establishes, with effect from the date, the Presiding Officer assumes charge of the post, a Court of Civil Judge (Senior Division) at Bilagi in Bagalkot District, and fixes Bilagi as the place at which the said Court of Civil Judge (Senior Division) shall be held and also fixes the local limits of the Jurisdiction of the said Court to be the area within the local limits of the revenue taluk of Bilagi in Bagalkot District.

By Order and in the name of the Governor of Karnataka,

**CHIKKAHANUMANTHAIAH**

Under Secretary to Government, Law Department (Admn-I).

**NOTIFICATION - II**

**No. LAW 13 LCE 2002, Bangalore, dated: 30th August 2004**

In exercise of the powers conferred by the proviso to sub-section (1) of Section 13 of the Karnataka Civil Courts Act, 1964 (Karnataka Act 21 of 1964), and in Partial Modification of the notification issued earlier in this behalf the Government of Karnataka, in consultations with the High Court of Karnataka, hereby varies, with effect from the date, the Presiding Officer assumes charge of the post of Civil Judge (Senior Division) Bilagi, the local limits of the jurisdiction of the Court of Civil Judge (Senior Division) Jamkhandi and the jurisdiction of the Court of Additional Civil Judge (Senior Division) Jamkhandi by excluding the revenue taluk of Bilagi from the jurisdiction of the said courts.

By Order and in the name of the Governor of Karnataka,

**CHIKKAHANUMANTHAIAH**

Under Secretary to Government, Law Department (Admn-I).

**NOTIFICATION - III**

**No. LAW 13 LCE 2002, Bangalore, dated: 30th August 2004**

In exercise of the powers conferred by section 8 of the Karnataka Civil Courts Act, 1964 (Karnataka Act 21 of 1964), the Government of Karnataka in consultation with the High Court of Karnataka, hereby fixes with effect from the date, the Presiding Officer assumes charge of the post of Civil Judge (Senior Division) Bilagi, the number of Civil Judge (Senior Division) to be appointed to the Court of Civil Judge (Senior Division) Bilagi, in Bagalkot District to be one.

By Order and in the name of the Governor of Karnataka,

**CHIKKAHANUMANTHAIAH**

P.R. 551

Under Secretary to Government, Law Department (Admn-I).

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 82 ಸಿಎಸ್‌ಎಸ್ 2004, ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಪ್ರಕರಣ 53ಎ ಅಡಿಯಲ್ಲಿ ಶ್ರೀ ಸೋಮೇಶ್ವರ ರೈತರ ಸಹಕಾರ ನೂಲಿನ ಗಿರಣಿ ನಿ., ಲಕ್ಷ್ಮೇಶ್ವರ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಪ್ರಕರಣ 53ಎ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಶ್ರೀ ಸೋಮೇಶ್ವರ ರೈತರ ಸಹಕಾರ ನೂಲಿನ ಗಿರಣಿ ನಿ., ಲಕ್ಷ್ಮೇಶ್ವರ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ನರೋಬ ಬಸಂತರಾವ್ ಪವಾರ್, ಸಾ: ನದಿನೀರಲಗಿ, ಸವಣೂರ್ ತಾಲ್ಲೂಕು, ಹಾವೇರಿ ಜಿಲ್ಲೆ.
2) ಶ್ರೀ ಸೋಮೇಶ ಜಗದೀಶ ಉಪನಾಳ, ಸಾ: ಲಕ್ಷ್ಮೇಶ್ವರ, ಗದಗ್ ಜಿಲ್ಲೆ.
3) ಶ್ರೀ ರಾಮನಗೌಡ ಹನುಮನಗೌಡ ನಾಗನೂರ ಸಾ: ಕದಾಂಪೂರ, ಮುಂಡರಗಿ ತಾಲ್ಲೂಕು, ಗದಗ್ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 552 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

-

**SOCIAL WELFARE SECRETARIAT**

**NOTIFICATION No. SWD 227 SAD 2003, Bangalore, dated: 26th August 2004**

1. Whereas, the Government of Karnataka is of the opinion that it is necessary to appoint a Commission of Inquiry, for the purpose of making an inquiry into a definite matter of public importance hereinafter specified.

2. Now, therefore, in exercise of the powers conferred by section 3 of the Commission of Inquiry Act, 1952 (Central Act 60 of 1952), the Government of Karnataka, hereby appoint a Commission of Inquiry headed by Hon'ble Justice Sri H.G. Balakrishna a retired Judge of Karnataka High Court to enquire into the persistent demands from a certain section of persons belonging to the Scheduled Castes and Scheduled Tribes that a disproportionately large number of benefits have gone to a particular sub-casts or tribe among the Scheduled Castes or Scheduled Tribes and thereby demanding for categorization of sub-castes and tribes among the Scheduled Castes and Scheduled Tribes. Further having regard to the nature of the inquiry and other circumstances of the case the Government of Karnataka, in exercise of the powers conferred by Sub-section (1) of Section 5 of the said Act hereby directs that all the provisions of subsection (2), (3) (4) and (5) of the said section shall apply to the Commission.

3. The terms of reference of the Commission shall be as follows:-

The Commission will go into all aspects of reservation in employment and admissions into educational institutions now available to the persons belonging to the Scheduled Castes and Scheduled Tribes and to,

(a) Examine whether a disproportionately large number of benefits have gone to any particular sub-caste or tribes of Scheduled Castes or Scheduled Tribes, and if so.

(b) Indicate all such steps as are necessary and required to be taken to ensure that the above benefits are equitably distributed among the various sub-castes or tribes of Scheduled castes and Scheduled Tribes and

(c) To enquire into any other matter incidental to, or arising out of the matters referred to above.

4. The Commission will hold its sitting at Bangalore or at any other place as it considers necessary. The Commission shall complete its enquiry and submit its report to the State Government within a period of three months from the date of assumption of charge.

By Order and in the name of the Governor of Karnataka,

**M.S. MARULASIDDAIAH**

P.R. 553 Under Secretary to Government, Social Welfare Department.

**ಕಾನೂನು ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಲಾ 123 ಎಲ್ಎಎಂ 2001, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2004**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ (2000ದ ಕರ್ನಾಟಕ ಅಧಿನಿಯಮ 28) ಸೆಕ್ಷನ್ 3(ಬಿ) ಅಡಿಯಲ್ಲಿ ಕಾನೂನು ಇಲಾಖೆಯಲ್ಲಿ ವ್ಯಾಜ್ಯ-7 ವಿಭಾಗಕ್ಕೆ ಸಂಬಂಧಿಸಿದ ವಿವರಗಳನ್ನು ಲಗತ್ತಿಸಿರುವ ಅನುಬಂಧದಲ್ಲಿ ಈ ಮೂಲಕ ಪ್ರಕಟಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಲಾ 123 ಎಲ್‌ಎಎಂ 2001, ದಿನಾಂಕ: 11.11.2002 ರಲ್ಲಿ**

**ಕಾನೂನು ಇಲಾಖೆಯ ವ್ಯಾಜ್ಯಗಳು-7 ಶಾಖೆಯ ವಿಷಯಗಳ ವಿವರಗಳನ್ನು ಪ್ರಕಟಿಸಿರುವಂತೆ**

**ಕಾರ್ಯದರ್ಶಿಗಳು**

**ಕಾನೂನು ಇಲಾಖೆ**

↓

**ಉಪಕಾರ್ಯದರ್ಶಿ-(ವ್ಯಾಜ್ಯ-7)**

**ಕಾನೂನು ಇಲಾಖೆ**

↓

**ವ್ಯಾಜ್ಯಗಳು-7 ಶಾಖೆಯಲ್ಲಿ ವ್ಯವಹರಿಸುತ್ತಿರುವ ವಿಷಯಗಳು**

| | | |
|---|---|---|
| 1) | ಹಿರಿಯ ಸಹಾಯಕರು | ಬೆಂಗಳೂರು ವಿಭಾಗಕ್ಕೆ ಸಂಬಂಧಿಸಿದ ಕ್ರಿಮಿನಲ್ ಮತ್ತು ಸಿವಿಲ್ ಮೊಕದ್ದಮೆಗಳು ಎಂಎಫ್‌ಎ, ಎಂಎಸ್‌ಎ, ಆರ್‌ಎಫ್‌ಎ, ಆರ್‌ಎಸ್‌ಎ, ಕ್ರಿಮಿನಲ್ ಮತ್ತು ಸಿವಿಲ್ ಅಪೀಲ್ ಪ್ರಕರಣಗಳು ಮತ್ತು ಎಂವಿಸಿ ಪ್ರಕರಣಗಳು, ಎಂವಿಸಿ ಪ್ರಕರಣಕ್ಕೆ ಸಂಬಂಧಿಸಿದ ಅಥಾರೈಸೇಶನ್ ಆದೇಶ ಹೊರಡಿಸುವಿಕೆ ಮತ್ತು ಇತರೇ ಮಿಸಲೇನಿಯಸ್ ಪ್ರಕರಣಗಳು. |
| 2) | ಹಿರಿಯ ಸಹಾಯಕರು | ಗುಲ್ಬರ್ಗಾ ವಿಭಾಗಕ್ಕೆ ಸಂಬಂಧಿಸಿದ ಕ್ರಿಮಿನಲ್ ಮತ್ತು ಸಿವಿಲ್ ಮೊಕದ್ದಮೆಗಳು ಎಂಎಫ್‌ಎ, ಎಂಎಸ್‌ಎ, ಆರ್‌ಎಫ್‌ಎ, ಆರ್‌ಎಸ್‌ಎ, ಕ್ರಿಮಿನಲ್ ಮತ್ತು ಸಿವಿಲ್ ಅಪೀಲು ಪ್ರಕರಣಗಳು, ಎಂವಿಸಿ ಪ್ರಕರಣಗಳು, ಎಂವಿಸಿ ಪ್ರಕರಣಕ್ಕೆ ಸಂಬಂಧಿಸಿದ ಅಥಾರೈಸೇಶನ್ ಆದೇಶ ಹೊರಡಿಸುವಿಕೆ ಮತ್ತು ಇತರೇ ಮಿಸಲೇನಿಯಸ್ ಪ್ರಕರಣಗಳು. |
| 3) | ಸಹಾಯಕರು | ಸಂಪೂರ್ಣ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಪ್ರಕರಣಗಳು, ಸಿವಿಲ್ ಮತ್ತು ಕ್ರಿಮಿನಲ್ ಪ್ರಕರಣಗಳು, ಎಂವಿಸಿ ಮತ್ತು ಭೂಸ್ವಾಧೀನ ಪ್ರಕರಣಗಳು, ರೆಮ್ಯೂನರೇಷನ್ ಬಿಲ್ ಆಫ್ ಅಡ್ವೋಕೇಟ್ಸ್, ಎಸ್‌ಎಲ್‌ಸಿ ಪ್ರಕರಣಗಳು, ಶಾಖಾಧಿಕಾರಿಗಳು ವಹಿಸಿದ ಇತರೇ ವಿಷಯಗಳು. |

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅಧಿಸೂಚನೆ ಸಂಖ್ಯೆ: ಲಾ 123 ಎಲ್‌ಎಎಂ 2001, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2004**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ (2000ದ ಕರ್ನಾಟಕ ಅಧಿನಿಯಮ 28) ಸೆಕ್ಷನ್ 3(ಬಿ) ಅಡಿಯಲ್ಲಿ ಕಾನೂನು ಇಲಾಖೆಯಲ್ಲಿ ಕಾನೂನು ಕೋಶಗಳು ವಿಭಾಗಕ್ಕೆ ಸಂಬಂಧಿಸಿದ ವಿವರಗಳನ್ನು ಲಗತ್ತಿಸಿರುವ ಅನುಬಂಧದಲ್ಲಿ ಈ ಮೂಲಕ ಪ್ರಕಟಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಲಾ 123 ಎಲ್‌ಎಎಂ 2001, ದಿನಾಂಕ: 3.9.2004 ರಲ್ಲಿ**

**"ಕಾನೂನು ಕೋಶಗಳು" ವಿಭಾಗಕ್ಕೆ ಸಂಬಂಧಿಸಿದ ವಿವರಗಳನ್ನು ಪ್ರಕಟಿಸಿರುವಂತೆ**

**ಕಾರ್ಯದರ್ಶಿಗಳು, ಕಾನೂನು ಇಲಾಖೆ**

**ಅಪರ ಕಾರ್ಯದರ್ಶಿ-1, ಕಾನೂನು ಇಲಾಖೆ**

**ಕಾನೂನು ಕೋಶಗಳು**

| | | |
|---|---|---|
| 1) | ಆರ್ಥಿಕ ಮತ್ತು ಕಾರ್ಮಿಕ | ಕಾನೂನು ಕೋಶಗಳಿಂದ ಬರುವ ರಿಟ್ ಪಿಟಿಷನ್ ಹಾಗೂ ಅಪೀಲುಗಳ ಕಡತಗಳಿಗೆ ಅಭಿಪ್ರಾಯ ಕೊಡುವುದು ಹಾಗೂ ಕಾನೂನು ಕೋಶಗಳ ಇತರ ಕಡತಗಳ ಮೇಲ್ವಿಚಾರಣೆ. |
| 2) | ಅರಣ್ಯ ಪರಿಸರ ಮತ್ತು ಜೀವಶಾಸ್ತ್ರ | |
| 3) | ಗ್ರಾಮೀಣಾಭಿವೃದ್ಧಿ, ಪಂ.ರಾಜ್ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | |
| 4) | ಸಿಆಸುಇ ಕನ್ನಡ ಮತ್ತು ಸಂಸ್ಕೃತಿ ಇಲಾಖೆ | |
| 5) | ಇಂಧನ, ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ | |
| 6) | ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆ. | |
| 7) | ಕೃಷಿ ಮತ್ತು ತೋಟಗಾರಿಕೆ ಪಶುಸಂಗೋಪನೆ ಮತ್ತು ಮೀನುಗಾರಿಕೆ ಮತ್ತು ಸಹಕಾರ ಇಲಾಖೆ. | |
| 8) | ಒಳಾಡಳಿತ ಮತ್ತು ಸಾರಿಗೆ ಇಲಾಖೆ | |

| | | |
|---|---|---|
| 9) | ವಾಣಿಜ್ಯ ಮತ್ತು ಕೈಗಾರಿಕೆ ರೇಷ್ಮೆ ಯೋಜನೆ ಮತ್ತು ಸಾಂಖ್ಯಿಕ ಹಣಕಾಸು ಮತ್ತು ಸಾಂಖ್ಯಿಕ ಇಲಾಖೆ | |
| 10) | ಶಿಕ್ಷಣ ಮತ್ತು ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆ | |
| 11) | ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಕಂದಾಯ ಇಲಾಖೆ. | |

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅಧಿಸೂಚನೆ ಸಂಖ್ಯೆ: ಲಾ 123 ಎಲ್ಎಎಂ 2001, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2004**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ (2000ದ ಕರ್ನಾಟಕ ಅಧಿನಿಯಮ 28) ಸೆಕ್ಷನ್ 3(ಬಿ) ಅಡಿಯಲ್ಲಿ ಕಾನೂನು ಇಲಾಖೆ ಕಾವೇರಿ ಜಲ ವಿವಾದ ವಿಭಾಗಕ್ಕೆ ಸಂಬಂಧಿಸಿದ ವಿವರಗಳನ್ನು ಈ ಮೂಲಕ ಪ್ರಕಟಣೆಗೊಳಿಸಲಾಗಿದೆ.

1) ಸಂಸ್ಥೆಯ ವಿವರ ಹಾಗೂ ಅದರ ಕಾರ್ಯ ಮತ್ತು ಕರ್ತವ್ಯಗಳು (ಶಾಖಾವಾರು ವಿವರಗಳು ಅನುಬಂಧದಲ್ಲಿರುವಂತಿದೆ)

ಅ) ಕಾನೂನು ಇಲಾಖೆಯ ಕಾವೇರಿ ಜಲ ವಿವಾದ ವಿಭಾಗದ (ಸಂಸ್ಥೆಯು) ವಿವರ ಈ ಕೆಳಕಂಡಂತೆ ಇದೆ.

**ಕಾರ್ಯದರ್ಶಿಗಳು**

**ಕಾನೂನು ಇಲಾಖೆ**

↓

**ಉಪ ಕಾರ್ಯದರ್ಶಿ**

**ಕಾನೂನು ಇಲಾಖೆ (ಕಾವೇರಿ ಜಲ ವಿವಾದ)**

↓

**ಕಾವೇರಿ ಜಲ ವಿವಾದ ಶಾಖೆ**

**ಕಾವೇರಿ ಜಲವಿವಾದ ಶಾಖೆಯ ಕಾರ್ಯ ಮತ್ತು ಕರ್ತವ್ಯಗಳು:**

1. ಕಾವೇರಿ : ಕೃಷ್ಣ : ಭೀಮಾ ನದಿ ನೀರಿಗೆ ಸಂಬಂಧಪಟ್ಟಂತೆ ಉದ್ಭವಿಸಿರುವ : ಉದ್ಭವವಾಗುವ ಅಂತರ ರಾಜ್ಯ ಜಲ ವಿವಾದಗಳನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಹಾಗೂ ಸಂಬಂಧಿತ ನ್ಯಾಯಾಧೀಕರಣದಲ್ಲಿ ರಾಜ್ಯದ ಪರವಾಗಿ ಪ್ರತಿನಿಧಿಸಲು:

(ಅ) ವಕೀಲರುಗಳ ನೇಮಕ

(ಆ) ವಕೀಲರುಗಳ ಸೇವಾ ಶುಲ್ಕ ನಿಗದಿ : ಪರಿಷ್ಕರಣೆ

(ಇ) ಆಡಳಿತ ಇಲಾಖೆಯಿಂದ ಬರುವ ಸರ್ವೋಚ್ಚ ನ್ಯಾಯಾಲಯದಲ್ಲಿ ಅಥವಾ ಕಾವೇರಿ : ಕೃಷ್ಣ ನ್ಯಾಯಾಧೀಕರಣದಲ್ಲಿ ಸಲ್ಲಿಸಬೇಕಾದ ಟಿಪ್ಪಣಿ : ಅಫಿಡವಿಟ್‌ಗಳ ಅನುಮೋದನೆ

(ಈ) ಅಡ್ವೊಕೇಟ್ ಜನರಲ್‌ರವರ ಸೇವಾ ಶುಲ್ಕದ ಬಗ್ಗೆ ಪತ್ರ ವ್ಯವಹಾರ

(ಉ) ಮುಖ್ಯ ಮಂತ್ರಿ : ಮುಖ್ಯ ಕಾರ್ಯದರ್ಶಿಗಳ ಕಛೇರಿಯಿಂದ ಬರುವ ಸಂಬಂಧಿತ ವಿಷಯದ ನಿರ್ವಹಣೆ

1. ಅ. ಹೊರ ರಾಜ್ಯಗಳಲ್ಲಿನ ಉಚ್ಚ ನ್ಯಾಯಾಲಯದಲ್ಲಿರುವ ರಾಜ್ಯಕ್ಕೆ ಸಂಬಂಧಿತ ತಕರಾರು ಅರ್ಜಿಗಳ ವಿಷಯದಲ್ಲಿ ರಾಜ್ಯದ ಪರವಾಗಿ ಪ್ರತಿನಿಧಿಸಲು:

(ಅ) ವಕೀಲರುಗಳ ನೇಮಕ

(ಆ) ವಕೀಲರುಗಳ ಸೇವಾ ಶುಲ್ಕದ ಬಗ್ಗೆ ಪತ್ರ ವ್ಯವಹಾರ

(ಇ) ಆರ್ಥಿಕ ಇಲಾಖೆಯೊಡನೆ ಸೇವಾ ಶುಲ್ಕದ ನಿಗದಿ ಬಗ್ಗೆ ಸಹಮತಿ ಪಡೆಯುವುದು.

(ಈ) ಸಂಬಂಧಿತ ಆಡಳಿತ ಇಲಾಖೆಯೊಡನೆ ತಕರಾರು ಅರ್ಜಿಯ ಬಗ್ಗೆ ಪತ್ರ ವ್ಯವಹಾರ ಇತ್ಯಾದಿ.

2. ಅಧಿಕಾರಿಗಳ ಅಧಿಕಾರ ಹಾಗೂ ಕರ್ತವ್ಯಗಳು ಹಾಗೂ ಕಾರ್ಯ ವಿಧಾನದ ವಿವರ : ಶಾಖೆಯ ಕರ್ತವ್ಯಗಳನ್ನು ಸಚಿವಾಲಯದ ಕಛೇರಿ ವಿಧಾನದ ಪರಿಷ್ಕೃತ ಕೈಪಿಡಿಯಲ್ಲಿ ವಿವರಿಸಲಾಗಿದೆ.

3. ಸಾರ್ವಜನಿಕ ಪ್ರಾಧಿಕಾರದ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ ಅದು ನಿಗದಿಪಡಿಸಿದ ಮಾನದಂಡ:
ಸಚಿವಾಲಯದ ಕಛೇರಿ ವಿಧಾನದ ಪರಿಷ್ಕೃತ ಕೈಪಿಡಿಯಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನ ಹಾಗೂ ಶಾಖೆಯಲ್ಲಿನ ವಿಷಯಗಳಿಗೆ ಸಂಬಂಧಪಟ್ಟ ಅಧಿನಿಯಮಗಳು ಹಾಗೂ ಸ್ಥಾಯೀ ಸೂಚನೆಗಳನ್ನು ಮಾನದಂಡವಾಗಿ ಇಟ್ಟುಕೊಳ್ಳಲಾಗಿದೆ.

4. ಮಾಹಿತಿ ಪಡೆಯಲು ನಾಗರೀಕರಿಗೆ ಲಭ್ಯವಿರುವ ಸೌಲಭ್ಯಗಳು ಹಾಗೂ ನಾಗರೀಕರಿಗೆ ನೀಡಬಹುದಾದ ಮಾಹಿತಿ.
ಶಾಖೆಯಲ್ಲಿ ನಿರ್ವಹಿಸುವ ವಿಷಯಗಳ ಕುರಿತಂತೆ ಹೊರಡಿಸಬಹುದಾದ ಕೆಲವೊಂದು ಆದೇಶ ಮತ್ತು ಇತರೆ ಮಾಹಿತಿಗಳನ್ನು ಗೋಪ್ಯತೆ ಕಾರಣದಿಂದಾಗಿ ಸಾರ್ವಜನಿಕರಿಗೆ ನೀಡಲು ಸಮಂಜಸವಾಗದು. ಖಾಸಗಿ ಹಕ್ಕುಗಳಿಗೆ ಚ್ಯುತಿ ಬಾರದಿದ್ದಲ್ಲಿ ಕೋರಿಕೆಗಳು ಸಾರ್ವಜನಿಕ ಹಿತದೃಷ್ಟಿಯಿಂದ ಕೂಡಿದ್ದಲ್ಲಿ ಮಾಹಿತಿಯನ್ನು ಒದಗಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಲಾ 123 ಎಲ್‌ಎಎಂ 2001, ದಿನಾಂಕ: 3.9.2004 ರಲ್ಲಿ**

**ಕಾನೂನು ಇಲಾಖೆಯ ಕಾವೇರಿ ಜಲ ವಿವಾದ ಶಾಖೆಯ ಶಾಖಾವಾರು ವಿವರಗಳನ್ನು ಪ್ರಕಟಿಸಿರುವಂತೆ**

**ಕಾರ್ಯದರ್ಶಿಗಳು**

**ಕಾನೂನು ಇಲಾಖೆ**



**ಉಪಕಾರ್ಯದರ್ಶಿ**

**ಕಾನೂನು ಇಲಾಖೆ (ಕಾವೇರಿ ಜಲ ವಿವಾದ)**



**ಕಾವೇರಿ ಜಲ ವಿವಾದ ಶಾಖೆ**

**ಕಾವೇರಿ ಜಲ ವಿವಾದ ಶಾಖೆಯ ಕಾರ್ಯ ಮತ್ತು ಕರ್ತವ್ಯಗಳು:**

1. ಕಾವೇರಿ : ಕೃಷ್ಣ : ಭೀಮಾ ನದಿ ನೀರಿಗೆ ಸಂಬಂಧಪಟ್ಟಂತೆ ಉದ್ಭವಿಸಿರುವ : ಉದ್ಭವವಾಗುವ ಅಂತರ ರಾಜ್ಯ ಜಲ ವಿವಾದಗಳನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಹಾಗೂ ಸಂಬಂಧಿತ ನ್ಯಾಯಾಧೀಕರಣದಲ್ಲಿ ರಾಜ್ಯದ ಪರವಾಗಿ ಪ್ರತಿನಿಧಿಸಲು:

(ಅ) ವಕೀಲರುಗಳ ನೇಮಕ

(ಆ) ವಕೀಲರುಗಳ ಸೇವಾ ಶುಲ್ಕ ನಿಗದಿ : ಪರಿಷ್ಕರಣೆ

(ಇ) ಆಡಳಿತ ಇಲಾಖೆಯಿಂದ ಬರುವ ಸರ್ವೋಚ್ಚ ನ್ಯಾಯಾಲಯದಲ್ಲಿ ಅಥವಾ ಕಾವೇರಿ : ಕೃಷ್ಣ ನ್ಯಾಯಾಧೀಕರಣದಲ್ಲಿ ಸಲ್ಲಿಸಬೇಕಾದ ಟಿಪ್ಪಣಿ : ಅಫಿಡವಿಟ್‌ಗಳ ಅನುಮೋದನೆ

(ಈ) ಅಡ್ವೊಕೇಟ್ ಜನರಲ್‌ರವರ ಸೇವಾ ಶುಲ್ಕದ ಬಗ್ಗೆ ಪತ್ರ ವ್ಯವಹಾರ

(ಉ) ಮುಖ್ಯ ಮಂತ್ರಿ : ಮುಖ್ಯ ಕಾರ್ಯದರ್ಶಿಗಳ ಕಛೇರಿಯಿಂದ ಬರುವ ಸಂಬಂಧಿತ ವಿಷಯದ ನಿರ್ವಹಣೆ

1. ಅ. ಹೊರ ರಾಜ್ಯಗಳಲ್ಲಿನ ಉಚ್ಚ ನ್ಯಾಯಾಲಯದಲ್ಲಿರುವ ರಾಜ್ಯಕ್ಕೆ ಸಂಬಂಧಿತ ತಕರಾರು ಅರ್ಜಿಗಳ ವಿಷಯದಲ್ಲಿ ರಾಜ್ಯದ ಪರವಾಗಿ ಪ್ರತಿನಿಧಿಸಲು:

(ಅ) ವಕೀಲರುಗಳ ನೇಮಕ

(ಆ) ವಕೀಲರುಗಳ ಸೇವಾ ಶುಲ್ಕದ ಬಗ್ಗೆ ಪತ್ರ ವ್ಯವಹಾರ

(ಇ) ಆರ್ಥಿಕ ಇಲಾಖೆಯೊಡನೆ ಸೇವಾ ಶುಲ್ಕದ ನಿಗದಿ ಬಗ್ಗೆ ಸಹಮತಿ ಪಡೆಯುವುದು.

(ಈ) ಸಂಬಂಧಿತ ಆಡಳಿತ ಇಲಾಖೆಯೊಡನೆ ತಕರಾರು ಅರ್ಜಿಯ ಬಗ್ಗೆ ಪತ್ರ ವ್ಯವಹಾರ ಇತ್ಯಾದಿ.

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅಧಿಸೂಚನೆ ಸಂಖ್ಯೆ: ಲಾ 123 ಎಲ್‌ಎಎಂ 2001, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2004**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ (2000ದ ಕರ್ನಾಟಕ ಅಧಿನಿಯಮ 28) ಸೆಕ್ಷನ್ 3(ಬಿ) ಅಡಿಯಲ್ಲಿ ಕಾನೂನು ಇಲಾಖೆ (ಆಡಳಿತ) ವಿಭಾಗಕ್ಕೆ ಸಂಬಂಧಿಸಿದ ವಿವರಗಳನ್ನು ಈ ಮೂಲಕ ಪ್ರಕಟಣೆಗೊಳಿಸಲಾಗಿದೆ.

1) ಸಂಸ್ಥೆಯ ವಿವರ ಹಾಗೂ ಅದರ ಕಾರ್ಯ ಮತ್ತು ಕರ್ತವ್ಯಗಳು (ಶಾಖಾವಾರು ವಿವರಗಳು ಅನುಬಂಧದಲ್ಲಿರುವಂತಿದೆ)

ಅ) ಕಾನೂನು ಇಲಾಖೆಯ ಆಡಳಿತ ವಿಭಾಗದ (ಸಂಸ್ಥೆಯು) ವಿವರ ಈ ಕೆಳಕಂಡಂತೆ ಇದೆ.

**ಕಾರ್ಯದರ್ಶಿಗಳು**

**ಕಾನೂನು ಇಲಾಖೆ**

**ಉಪ ಕಾರ್ಯದರ್ಶಿ**

**ಕಾನೂನು ಇಲಾಖೆ (ಆಡಳಿತ)**

| | |
|---|---|
| ಅಧೀನ ಕಾರ್ಯದರ್ಶಿ ಆಡಳಿತ-1 | ಅಧೀನ ಕಾರ್ಯದರ್ಶಿ ಆಡಳಿತ-2 |
| ಆಡಳಿತ-1 ಶಾಖೆ | ಆಡಳಿತ-2 ಶಾಖೆ |

ಅ) ಕಾರ್ಯ ಮತ್ತು ಕರ್ತವ್ಯಗಳು-1

**ಅಧೀನ ಕಾರ್ಯದರ್ಶಿ-1**

(1) ರಾಜ್ಯ ಅಧೀನ ನ್ಯಾಯಾಲಯಗಳ ಸ್ಥಾಪನೆ, ಮುಂದುವರೆಸುವಿಕೆ ಹುದ್ದೆಗಳ ಸೃಜನೆ, ಮುಂದುವರಿಸುವಿಕೆ.

(2) ರಾಜ್ಯದ ಅಧೀನ ನ್ಯಾಯಾಲಯಗಳ ಅಧಿಕಾರಿ : ನೌಕರರ ಸೇವಾ ವಿಷಯಗಳು.

(3) ಜಿಲ್ಲಾ ಸರ್ಕಾರಿ ವಕೀಲರು : ಅಪರ ಸರ್ಕಾರಿ ವಕೀಲರ ನೇಮಕಾತಿ.

(4) ರಾಜ್ಯದಲ್ಲಿನ ಅಧೀನ ನ್ಯಾಯಾಲಯಗಳ ಕಾಮಗಾರಿಗಳು.

(5) ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಸಂಬಂಧಿಸಿದಂತೆ.

(6) ಅಡ್ವೊಕೇಟ್ ಜನರಲ್ ಕಛೇರಿಯ ಸೇವಾ ವಿಷಯಗಳು.

(7) ವಯಸ್ಸು ನಿರ್ಧರಣಾ ಅಧಿನಿಯಮದಡಿ ಮಂಡನಾಧಿಕಾರಿ ನಿರ್ವಹಣೆ ಬಗ್ಗೆ

(8) ಸಮನ್ವಯ ಕಾರ್ಯ-ಕಾನೂನು ಇಲಾಖೆಗೆ ಸಂಬಂಧಿಸಿದಂತೆ

ಅಧೀನ ಕಾರ್ಯದರ್ಶಿ-2

(1) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಅಧಿಕಾರಿ ಮತ್ತು ನೌಕರರ ಸೇವಾ ವಿಷಯಗಳು

(2) ನೋಟರಿಗಳ ಎಲ್ಲಾ ವಿಷಯಗಳು

(3) ಕಾನೂನು ಸೇವಾ ಪ್ರಾಧಿಕಾರ ರಚನೆ ಮತ್ತು ಸೇವಾ ವಿಷಯಗಳು ಇತ್ಯಾದಿ

(4) ಅಡ್‌ಮಿನಿಸ್ಟ್ರೇಟಿವ್ ಜನರಲ್ ಮತ್ತು ಅಫಿಷಿಯಲ್ ಟ್ರಸ್ಟಿ ಇವರ ನೇಮಕಾತಿ ಇತ್ಯಾದಿ

(5) ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಇವರ ವಾರ್ಷಿಕ ವರದಿ ಇತ್ಯಾದಿ

2) ಅಧಿಕಾರಿಗಳ ಅಧಿಕಾರ ಹಾಗೂ ಕರ್ತವ್ಯಗಳು ಹಾಗೂ ಕಾರ್ಯ ವಿಧಾನದ ವಿವರ:

ಕಾನೂನು ಇಲಾಖೆಯ ಆಡಳಿತ ವಿಭಾಗದ ಅಧಿಕಾರಿಗಳಿಗೆ ನೀಡಲಾದ ಅಧಿಕಾರಗಳು : ಕರ್ತವ್ಯದ ವಿವರಗಳನ್ನು ದಿನಾಂಕ: 11.10.2002ರ ಸರ್ಕಾರಿ ಆದೇಶ ಸಂಖ್ಯೆ: ಲಾ 123 ಎಲ್‌ಎಂ 2001 ರಲ್ಲಿ ನಿಗದಿಪಡಿಸಲಾಗಿದೆ. ಈ ಶಾಖೆಗಳ ಕರ್ತವ್ಯಗಳನ್ನು ಸಚಿವಾಲಯದ ಕಛೇರಿ ವಿಧಾನದ ಪರಿಷ್ಕೃತ ಕೈಪಿಡಿಯಲ್ಲಿ ವಿವರಿಸಲಾಗಿದೆ.

3) ಸಾರ್ವಜನಿಕ ಪ್ರಾಧಿಕಾರದ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ, ಅದು ನಿಗದಿಪಡಿಸಿದ ಮಾನದಂಡ:

ಸಚಿವಾಲಯದ ಕಛೇರಿ ವಿಧಾನದ ಪರಿಷ್ಕೃತ ಕೈಪಿಡಿಯಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನ ಹಾಗೂ ಕಾನೂನು ಇಲಾಖೆಯ ಆಡಳಿತ ವಿಭಾಗವು ನಿರ್ವಹಿಸುವ ವಿಷಯಗಳಿಗೆ ಸಂಬಂಧಿಸಿ, ಅಧಿನಿಯಮಗಳು, ನಿಯಮಗಳು, ಸುತ್ತೋಲೆಗಳು, ಭಾರತ ಸರ್ಕಾರ ಹೊರಡಿಸಿರುವ ನಿಯಮಗಳು ಹಾಗೂ ಸ್ಥಾಯೀ ಸೂಚನೆಗಳು ಮಾನದಂಡವಾಗಿ ಇಟ್ಟುಕೊಳ್ಳಲಾಗಿದೆ.

4) ಮಾಹಿತಿಗಳನ್ನು ಪಡೆಯಲು ನಾಗರೀಕರಿಗೆ ಲಭ್ಯವಿರುವ ಸೌಲಭ್ಯಗಳು ಹಾಗೂ ನಾಗರೀಕರಿಗೆ ನೀಡಬಹುದಾದ ಮಾಹಿತಿ:

ಶಾಖೆಗಳಲ್ಲಿ ನಿರ್ವಹಿಸುತ್ತಿರುವ ವಿಷಯಗಳ ಕುರಿತಂತೆ ಹೊರಡಿಸಬಹುದಾದ ಆದೇಶ ಅಧಿಸೂಚನೆ ಮತ್ತು ಇತರೆ ಮಾಹಿತಿಯನ್ನು ಪ್ರಕಟಣೆಯ ಮೂಲಕ (ಕರ್ನಾಟಕ ರಾಜ್ಯಪತ್ರದಲ್ಲಿ) ಸಾರ್ವಜನಿಕರ ಗಮನಕ್ಕೆ ತರಲಾಗುತ್ತಿದೆ. ರಾಜ್ಯದಲ್ಲಿನ ಅಧೀನ ನ್ಯಾಯಾಲಯಗಳ ಸ್ಥಾಪನೆ, ಅಧಿಕಾರಿ ನೌಕರರ ಸೇವಾ ವಿಷಯಗಳು, ಜಿಲ್ಲಾ ಸರ್ಕಾರಿ ನೌಕರರು ಅಪರ ಸರ್ಕಾರಿ ವಕೀಲರ ನೇಮಕಾತಿ, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಸಂಬಂಧಿಸಿದ ವಿಷಯಗಳು, ನೋಟರಿಗಳ ವಿಷಯಗಳು ಅಡ್‌ಮಿನಿಸ್ಟ್ರೇಟರ್ ಜನರಲ್ ಹಾಗೂ ಅಫಿಷಿಯಲ್ ಟ್ರಸ್ಟಿ ಇವರ ನೇಮಕಾತಿ ಮತ್ತು ಇತ್ಯಾದಿ, ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಇದರ ವಾರ್ಷಿಕ ವರದಿ ಈ ಎಲ್ಲಾ ವಿಷಯಗಳ ಕುರಿತು ಹೊರಡಿಸಬಹುದಾದ ಸರ್ಕಾರಿ ಆದೇಶ : ಅಧಿಸೂಚನೆ : ಸುತ್ತೋಲೆ ಇವುಗಳನ್ನು ನಾಗರೀಕರಿಗೆ ನೀಡಲಾಗುವುದು.

ಯಾವ ಕೋರಿಕೆಗಳು ಸಾರ್ವಜನಿಕ ಹಿತದೃಷ್ಟಿಯಿಂದ ಕೂಡಿರುತ್ತದೆಯೋ ಅಂತಹ ಸಂದರ್ಭದಲ್ಲಿ ಮೇಲ್ಕಂಡ ಮಾಹಿತಿ : ದಾಖಲೆಗಳನ್ನು ನೀಡಲಾಗುವುದು. ಖಾಸಗಿ ಹಕ್ಕುಗಳಿಗೆ ಚ್ಯುತಿ ಬಾರದಿದ್ದಲ್ಲಿ ಕೋರಿಕೆಗಳು ಸಾರ್ವಜನಿಕ ಹಿತದೃಷ್ಟಿಯಿಂದ ಕೂಡಿದ್ದಲ್ಲಿ ಕಲಂ 6(ಡಿ)ಯ ಪರಂತುಕದ ಮೇರೆಗೆ ಅಧಿಕಾರಿಗಳ : ನೌಕರರ ಸೇವಾ : ವೈಯಕ್ತಿಕ ವಿವರಗಳನ್ನು ನೀಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಲಾ 123 ಎಲ್‌ಎಂ 2001, ದಿನಾಂಕ: 11.11.2002ರಲ್ಲಿ**
**ಕಾನೂನು ಇಲಾಖೆಯ ಆಡಳಿತ ವಿಭಾಗದ ಶಾಖಾವಾರು ವಿವರಗಳನ್ನು ಪ್ರಕಟಿಸಿರುವಂತೆ**

**ಕಾರ್ಯದರ್ಶಿಗಳು, ಕಾನೂನು ಇಲಾಖೆ**

**ಉಪಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ)**

| ಅಧೀನ ಕಾರ್ಯದರ್ಶಿ ಆಡಳಿತ-1<br>ಆಡಳಿತ-1 ಶಾಖೆ | ಅಧೀನ ಕಾರ್ಯದರ್ಶಿ ಆಡಳಿತ-2<br>ಆಡಳಿತ-2 ಶಾಖೆ |
|---|---|
| ರಾಜ್ಯ ಅಧೀನ ನ್ಯಾಯಾಲಯಗಳಲ್ಲಿನ ಸ್ಥಾಪನೆ, ಮುಂದುವರಿಕೆ, ಹುದ್ದೆಗಳ ಸೃಜನೆ, ಮುಂದುವರಿಸುವಿಕೆ, ರಾಜ್ಯ ಅಧೀನ ನ್ಯಾಯಾಲಯಗಳ ಅಧಿಕಾರಿ : ನೌಕರರ ಸೇವಾ ವಿಷಯಗಳು, ಜಿಲ್ಲಾ ಸರ್ಕಾರಿ ವಕೀಲರು : ಅಪರ ಸರ್ಕಾರಿ ವಕೀಲರ ನೇಮಕಾತಿ<br>* ರಾಜ್ಯದಲ್ಲಿನ ಅಧೀನ ನ್ಯಾಯಾಲಯಗಳ ಕಾಮಗಾರಿಗಳು<br>* ರಾಷ್ಟ್ರೀಯ ಮಾನವ ಹಕ್ಕುಗಳಿಗೆ ಸಂಬಂಧಿಸಿದ ವಿಷಯ<br>* ಅಡ್ವೊಕೇಟ್ ಜನರಲ್ ಕಛೇರಿಯ ಸೇವಾ ವಿಷಯಗಳು<br>* ವಯಸ್ಸು ನಿರ್ಧರಣಾ ಅಧಿನಿಯಮದಡಿ ಮಂಡನಾಧಿಕಾರಿ ನಿರ್ವಹಣೆ ಬಗ್ಗೆ<br>* ಕಾನೂನು ಇಲಾಖೆಗೆ ಸಂಬಂಧಿಸಿದಂತೆ ಸಮನ್ವಯ ಕಾರ್ಯನಿರ್ವಹಣೆ<br>* ಇತ್ಯಾದಿ, | * ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಅಧಿಕಾರಿ ಮತ್ತು ನೌಕರರ ಸೇವಾ ವಿಷಯಗಳು<br>* ನೋಟರಿಗಳ ಎಲ್ಲಾ ವಿಷಯಗಳು<br>* ಕಾನೂನು ಸೇವಾ ಪ್ರಾಧಿಕಾರ ರಚನೆ ಮತ್ತು ಸೇವಾ ವಿಷಯಗಳು<br>* ಅಡ್‌ಮಿನಿಸ್ಟ್ರೇಟಿವ್ ಜನರಲ್ ಮತ್ತು ಅಫಿಷಿಯಲ್ ಟ್ರಸ್ಟಿ ಇವರ ನೇಮಕಾತಿ ಇತ್ಯಾದಿ<br>* ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಇವರ ವಾರ್ಷಿಕ ವರದಿ<br>* ಇತ್ಯಾದಿ. |

**ಚಿಕ್ಕಹನುಮಂತಯ್ಯ**

ಪಿ.ಆರ್. 566 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).